# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 26 (242)
2. ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
3. ಉತ್ತರಿಸುವ ದಿನಾಂಕ : 22.09.2020
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕೆ.ಐ.ಎ.ಡಿ.ಬಿ. ವ್ಯಾಪ್ತಿಯ ಹೈಟೆಕ್ ಡಿಫೆನ್ಸ್ ಮತ್ತು ಏರೋಸ್ಪೇಸ್ ಪಾರ್ಕ್ ಪ್ರದೇಶದಲ್ಲಿ ಏರೋ ಕಾಮನ್ ಫಿನಿಷಿಂಗ್ ಫೆಸಿಲಿಟಿ (ಎ.ಸಿ.ಎಫ್.ಎಫ್) ಯೋಜನೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರದ ಸಹಯೋಗದಲ್ಲಿ ಮಂಜೂರು ಮಾಡಲಾದ ಮೊತ್ತವೆಷ್ಟು; ಯೋಜನೆಯ ರೂಪು ರೇಷೆಗಳೇನು; (ಸಂಪೂರ್ಣ ವಿವರ ನೀಡುವುದು) | ಬೆಂಗಳೂರಿನ ಏರೋಸ್ಪೇಸ್ ಪಾರ್ಕ್.ನಲ್ಲಿ ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿ (ಎ.ಸಿ.ಎಫ್.ಎಫ್) ಕೇಂದ್ರವನ್ನು ಭಾರತ ಸರ್ಕಾರದ **Modified Industrial Infrastructure Upgradation Scheme (MIIUS)** ರಡಿಯಲ್ಲಿ ಸ್ಥಾಪಿಸಲು 2015-16ನೇ ಸಾಲಿನಲ್ಲಿ ಒಟ್ಟು ಯೋಜನಾ ವೆಚ್ಚ ರೂ. 93 ಕೋಟಿಗೆ ತಾತ್ವಿಕ ಅನುಮೋದನೆ ನೀಡಲಾಗಿದೆ.<br><br>ಈ ಯೋಜನೆಯಡಿ **Aerospace Components MSME** ತಯಾರಿಕೆಯಲ್ಲಿ ತೊಡಗಿರುವ ಘಟಕಗಳಿಗೆ **Common Facilities, R&D, Finishing Facility, Surface Treatment** ಸೌಕರ್ಯಗಳನ್ನು ಒದಗಿಸುವ ಉದ್ದೇಶವಾಗಿರುತ್ತದೆ. |

| | | |
|---|---|---|
| ಆ. | ಸದರಿ ಯೋಜನೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಪಾಲಿನ ಮೊತ್ತವೆಷ್ಟು; (ಪ್ರತ್ಯೇಕವಾಗಿ ವಿವರ ನೀಡುವುದು) | ಭಾರತ ಸರ್ಕಾರವು ಸದರಿ ಯೋಜನಾ ವೆಚ್ಚವನ್ನು ರೂ. 90.50 ಕೋಟಿಗಳಿಗೆ ನಿಗದಿಪಡಿಸಿದ್ದು, ಇದರಲ್ಲಿ ಭಾರತ ಸರ್ಕಾರದ ಪಾಲು ರೂ. 42.69 ಕೋಟಿಯಾಗಿದ್ದು ಹಾಗೂ ರಾಜ್ಯ ಸರ್ಕಾರದ ಪಾಲು ರೂ. 47.81 ಕೋಟಿಯಾಗಿರುತ್ತದೆ. |
| ಇ. | ಸದರಿ ಯೋಜನೆ ಸಂಬಂಧ ಕಾಮಗಾರಿ ಗುತ್ತಿಗೆ ಕರೆಯಲಾಗಿದೆಯೇ; ಯೋಜನೆ ಯಾವ ಹಂತದಲ್ಲಿದೆ; (ಸಂಪೂರ್ಣ ವಿವರ ನೀಡುವುದು) | ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿ (ಎ.ಸಿ.ಎಫ್.ಎಫ್) ಭಾರತದಲ್ಲೇ ಹೊಸ ಯೋಜನೆಯಾಗಿದ್ದು, ತಜ್ಞರ ಸಮಿತಿಯೊಂದನ್ನು ರಚಿಸಿ ಅದರ ಶಿಫಾರಸ್ಸಿನಂತೆ ಯೋಜನೆಯನ್ನು 4 ವಿಭಾಗಗಳಲ್ಲಿ ವಿಂಗಡಿಸಿ ದಿನಾಂಕ:18.10.2016 ರಂದು ಒಟ್ಟು ರೂ.90.50 ಕೋಟಿಗಳಿಗೆ ಟೆಂಡರ್ ಅಧಿಸೂಚನೆಯನ್ನು ಹೊರಡಿಸಲಾಗಿದೆ. (see tables below) |

| Verticals | Special Process |
|---|---|
| 1 | Aircraft Metal Components and Aircraft Rapid Prototyping components. |
| 2 | Aircraft Electrical and Electronic components. |
| 3 | Aircraft advanced Composite Materials. |
| 4 | Aircraft Painting & Finishing. |

ಅದರಂತೆ, 4 ವಿಭಾಗಗಳಿಗೆ ಗುತ್ತಿಗೆಯನ್ನು 4 ವಿವಿಧ ಕಂಪನಿಗಳಿಗೆ ದಿನಾಂಕ: 18.03.2017 ಮತ್ತು 20.03.2017 ರಂದು ಗುತ್ತಿಗೆಯ ಕಾರ್ಯಾದೇಶವನ್ನು ನೀಡಲಾಗಿರುತ್ತದೆ. ವಿವರಗಳು ಈ ಕೆಳಗಿನಂತೆ ಇರುತ್ತದೆ.

| Sl No | Special Process | Name of the agency | Contract Amount (Rs.in cr) |
|---|---|---|---|
| 1 | **PART-1:** Special Process: Aircraft Metal Components and Aircraft Rapid Prototyping components | M/s. Lean Automation Equipments Pvt Ltd | 23.36 |
| 2 | **PART-2:** Special Process: Aircraft Electrical and Electronic components | M/s. Stumpp Schuele and Somappa Springs Pvt. Ltd | 14.40 |
| 3 | **PART-3:** Special Process: Aircraft Advanced composite Materials | M/s. CNC India Tools and Services Pvt. Ltd | 22.50 |
| 4 | **PART-4:** Special Process: Aircraft Painting & Finishing | M/s. Universal Flexible Pvt Ltd | 27.41 |

| | | |
|---|---|---|
| | | ಮುಂದುವರೆದು, ದಿನಾಂಕ: 22.09.2017 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿ (ಎ.ಸಿ.ಎಫ್.ಎಫ್) ಕಾಮಗಾರಿಯ ಪ್ರಗತಿ ಪರಿಶೀಲನಾ ಸಭೆಯಲ್ಲಿ ಎ.ಸಿ.ಎಫ್.ಎಫ್ ತಾಂತ್ರಿಕ ಸಮಿತಿಯನ್ನು ಪುನರ್ ರಚಿಸಿ, ಸದರಿ ಯೋಜನೆಯನ್ನು ಪುನರ್ ಪರಿಶೀಲಿಸುವವರೆಗೂ ಕಾಮಗಾರಿಗಳನ್ನು ಕೂಡಲೇ ನಿಲ್ಲಿಸುವಂತೆ ನಿರ್ದೇಶಿಸಲಾಗಿತ್ತು. |
| ಈ. | ಸದರಿ ಯೋಜನೆ ಸಂಬಂಧ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ್ದ ಹಣವನ್ನು ಬಡ್ಡಿ ಸಮೇತ ಹಿಂಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | **Modified Industrial Infrastructure Upgradation Scheme** ನಿಯಮಾವಳಿಯಂತೆ ಸದರಿ ಯೋಜನೆಯು ಮಾರ್ಚ್ 2017 ಕ್ಕೆ ಕೇಂದ್ರ ಸರ್ಕಾರವು ಸ್ಥಗಿತಗೊಳಿಸಿದ್ದರಿಂದ, ಸದರಿ ಯೋಜನೆಯನ್ನು 31.03.2019 ರ ಒಳಗೆ ಪೂರ್ಣಗೊಳಿಸಬೇಕಾಗಿತ್ತು.<br><br>ಆದರೆ ಯೋಜನೆಯು 31.03.2019 ರ ಒಳಗೆ ಪೂರ್ಣಗೊಳ್ಳದೇ ಇರುವುದರಿಂದ ಕೇಂದ್ರ ಸರ್ಕಾರವು ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿ (ಎ.ಸಿ.ಎಫ್.ಎಫ್) ಯೋಜನೆಯನ್ನು ಹಿಂತೆಗೆದುಕೊಂಡ ಮೇರೆಗೆ ಯೋಜನೆಯನ್ನು ಸ್ಥಗಿತಗೊಳಿಸಲಾಯಿತು.<br><br>ಕೇಂದ್ರ ಸರ್ಕಾರವು **Modified Industrial Infrastructure Upgradation Scheme (MIIUS)** ಅಡಿಯಲ್ಲಿ ನೀಡಿದ ಅನುದಾನ ರೂ.12.807 ಕೋಟಿಗಳ ಮೊತ್ತವನ್ನು **Trust and Retention Account (TRA)** ಖಾತೆಯಲ್ಲಿ ಜಮೆ ಮಾಡಿಲಾಗಿದ್ದು, ಅದರಲ್ಲಿ ಶೇಖರಣೆಯಾದ ಬಡ್ಡಿಯೊಂದಿಗೆ ದಿನಾಂಕ: 20.11.2019 ರಂದು ಕೇಂದ್ರ ಸರ್ಕಾರಕ್ಕೆ ಹಿಂದಿರುಗಿಸಲಾಗಿದೆ. |

| | | |
|---|---|---|
| ಉ. | ಕೇಂದ್ರ ಸರ್ಕಾರ ಹಣ ಹಿಂಪಡೆಯಲು ಕಾರಣಗಳೇನು? | ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿ ಯೋಜನೆಯು ವಿನೂತನ ಯೋಜನೆಯಾಗಿದ್ದು ಭಾರತದಲ್ಲೇ ಪ್ರಥಮ ಯೋಜನೆಯಾಗಿರುತ್ತದೆ. ಏರೋಸ್ಪೇಸ್ ಉದ್ದಿಮೆಗಳಿಗೆ ಒಂದೇ ಕಡೆ ತಮ್ಮ ಉತ್ಪನ್ನಗಳಿಗೆ ಸಾಮಾನ್ಯ ಮೂಲಸೌಲಭ್ಯಗಳನ್ನು ಒದಗಿಸುವ ಯೋಜನೆಯಾಗಿತ್ತು.<br><br>ಸದರಿ ಯೋಜನೆಯನ್ನು ಕೇಂದ್ರ ಸರ್ಕಾರ **Modified Industrial Infrastructure Upgradation Scheme** ನಿಯಮಾವಳಿಯಂತೆ ಯೋಜನೆಯನ್ನು ಕೈಗೊಳ್ಳಲಾಯಿತು. ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ತಜ್ಞರ ಸಮಿತಿಯನ್ನು ರಚಿಸಿ ತಜ್ಞರ ಸಮಿತಿ ಸಭೆಯ ಶಿಫಾರಸ್ಸಿನಂತೆ 4 ವಿಭಾಗಗಳಾಗಿ ವಿಂಗಡಿಸಿ ಟೆಂಡರ್ ಆಹ್ವಾನಿಸಲಾಗಿತ್ತು.<br><br>ದಿನಾಂಕ: 22.09.2017 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿ (ಎ.ಸಿ.ಎಫ್.ಎಫ್) ಕಾಮಗಾರಿಯ ಪ್ರಗತಿ ಪರಿಶೀಲನಾ ಸಭೆಯಲ್ಲಿ ಎ.ಸಿ.ಎಫ್.ಎಫ್ ತಾಂತ್ರಿಕ ಸಮಿತಿಯನ್ನು ಪುನರ್ ರಚಿಸಿ, ಸದರಿ ಯೋಜನೆಯನ್ನು ಪುನರ್ ಪರಿಶೀಲಿಸುವವರೆಗೂ ಕಾಮಗಾರಿಗಳನ್ನು ಕೂಡಲೇ ನಿಲ್ಲಿಸುವಂತೆ ನಿರ್ದೇಶಿಸಲಾಗಿತ್ತು.<br><br>ಅದರಂತೆ ಮೆ: ಹೆಚ್.ಎ.ಎಲ್, ಮೆ:ಮಹಿಂದ್ರ ಏರೋಸ್ಪೇಸ್ ಹಾಗೂ ಇನ್ನಿತರೆ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಿ, 4 ವಿಭಾಗಗಳ ಗುತ್ತಿಗೆದಾರರೊಂದಿಗೆ ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿಯನ್ನು (ಎ.ಸಿ.ಎಫ್.ಎಫ್) ಅಂತಿಮ ಬಳಕೆದಾರರಿಗೆ ತಲುಪುವ ಬಗ್ಗೆ ಚರ್ಚಿಸಲಾಗಿತ್ತು.<br><br>ದಿನಾಂಕ:29.10.2018 ರಂದು ಸದರಿ ಯೋಜನೆಯನ್ನು ಸಂಬಂಧಿಸಿದ ಉದ್ದಿಮೆದಾರರು ಉಪಯೋಗಿಸುವ ಬಗ್ಗೆ ಹಾಗೂ ಸೌಲಭ್ಯ ಕೇಂದ್ರವನ್ನು ಪೂರ್ಣವಾಗಿ ಉಪಯೋಗಿಸಿ, ಪ್ರಯೋಜನ ಪಡೆಯುವ |

| | | |
|---|---|---|
| | | ಕೈಗಾರಿಕೆಗಳ ಎಂಡ್ ಯೂಸರ್ಸ್ ರವರ ಸಭೆಯನ್ನು ನಡೆಸಲಾಯಿತು. ಸಭೆಯಲ್ಲಿ ಮೆ:ಹೆಚ್.ಎ.ಎಲ್, ಮೆ:ಮಹಿಂದ್ರ ಏರೋಸ್ಪೇಸ್, ಮೆ:ಬೋಯಿಂಗ್, ಮೆ:ರಿಲೆಯನ್ಸ್ ಮುಂತಾದವರು ಭಾಗವಹಿಸಿ 4 ವಿಭಾಗಗಳ **Special Process** ಬಗ್ಗೆ ಸಾಧಕ ಬಾಧಕಗಳನ್ನು ಚರ್ಚಿಸಲಾಯಿತು.<br><br>ದಿನಾಂಕ: 06.12.2018 ರಂದು ನಡೆದ ಸಭೆಯಲ್ಲಿ ಮೆ:ಹೆಚ್.ಎ.ಎಲ್ ಮತ್ತು ಮೆ:ಬೋಯಿಂಗ್ ರವರಿಗೆ ತಮ್ಮ ತಾಂತ್ರಿಕ ಸಲಹೆಗಳನ್ನು ನೀಡಲು ಕೋರಲಾಗಿತ್ತು.<br><br>ದಿನಾಂಕ: 11.12.2018 ರಂದು ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿ (ಎ.ಸಿ.ಎಫ್.ಎಫ್) ಯೋಜನೆಯನ್ನು ಮೆ: ಹೆಚ್.ಎ.ಎಲ್, ಮೆ:ಬೋಯಿಂಗ್ ಹಾಗೂ ಇನ್ನಿತರೆ ಕಂಪನಿಗಳ ಸಹಯೋಗದೊಂದಿಗೆ ಕೈಗೊಳ್ಳಲು ಶಿಫಾರಸ್ಸು ಮಾಡಲಾಗಿತ್ತು. ದಿನಾಂಕ: 08.01.2019 ರಂದು ನಡೆದ ಸಭೆಯಲ್ಲಿ ಮೆ: ಹೆಚ್.ಎ.ಎಲ್ ಹಾಗೂ ಮೆ:ಬೋಯಿಂಗ್ ರವರು ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿ ಅನ್ನು ವಹಿಸಿಕೊಳ್ಳಲು ಕೋರಲಾಗಿತ್ತು. ಇದರ ಬಗ್ಗೆ ಸದರಿಯವರಿಂದ ಪ್ರತಿಕ್ರಿಯೆ ಬಂದಿರುವುದಿಲ್ಲ ಹಾಗೂ ಏರೋಸ್ಪೇಸ್ ಕೈಗಾರಿಕೆಗಳಿಂದ ಆಸಕ್ತಿ ತೋರಿಸಿರುವುದಿಲ್ಲ.<br><br>ದಿನಾಂಕ: 10.01.2019 ರಂದು ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ರವರು ಕೇಂದ್ರ ಸರ್ಕಾರಕ್ಕೆ ಸದರಿ ಯೋಜನೆಯ ಅನುಷ್ಠಾನಕ್ಕೆ ಹೆಚ್ಚುವರಿ ಗಡುವು ನೀಡಲು ಕೋರಿರುತ್ತಾರೆ.<br><br>ಆದರೆ, ಕೇಂದ್ರ ಸರ್ಕಾರವು ತಮ್ಮ ಪತ್ರ ದಿನಾಂಕ: 13.02.2019 ರ ಮುಖಾಂತರ **Modified Industrial Infrastructure Upgradation Scheme** ನಿಯಮಾವಳಿಯನ್ವಯ ಯೋಜನೆಯ ಅನುಷ್ಠಾನವು 31.03.2019 ಕ್ಕೆ ಮುಕ್ತಾಯಗೊಂಡಿರುವುದರಿಂದ ಹಾಗೂ 31.03.2019 ರ ನಂತರ ಆರ್ಥಿಕ ಸಹಮತಿ ಇಲ್ಲದಿರುವುದರಿಂದ ಕೇಂದ್ರ |

| | | |
|---|---|---|
| | | ಸರ್ಕಾರವು ಸದರಿ ಯೋಜನೆಯ ಅನುಷ್ಠಾನಕ್ಕೆ ಒದಗಿಸಿದ್ದ ಹಣವನ್ನು ಹಿಂಪಡೆದುಕೊಂಡಿರುತ್ತದೆ.<br>ಈಗಾಗಲೆ ತಿಳಿಸಿದಂತೆ, ಏರೋಸ್ಪೇಸ್ ಕಾಮನ್ ಫಿನಿಷಿಂಗ್ ಫೆಸಿಲಿಟಿ (ಎ.ಸಿ.ಎಫ್.ಎಫ್) ಯೋಜನೆಯು ವಿನೂತವಾಗಿರುತ್ತದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರವು ಅನೇಕ ರೀತಿಯ ಪ್ರಯತ್ನಗಳನ್ನು ಮಾಡಿರುತ್ತದೆ. ಆದರೆ ಕೇಂದ್ರ ಸರ್ಕಾರವು Modified Industrial Infrastructure Upgradation Scheme ಯೋಜನೆಯನ್ನು 31.03.2017 ಕೊನೆಗೊಂಡಿರುವುದರಿಂದ ಸದರಿ ಎ.ಸಿ.ಎಫ್.ಎಫ್ ಅನುಷ್ಠಾನಗೊಳಿಸಲು 31.03.2019 ರ ನಂತರ ವಿಸ್ತರಿಸದೇ ಇರುವುದರಿಂದ, ಯೋಜನೆಯನ್ನು ರದ್ದುಗೊಳಿಸಿ ಕೇಂದ್ರ ಸರ್ಕಾರದ ಹಣವನ್ನು ಹಿಂದಿರುಗಿಸಲಾಯಿತು. |

ಸಂಖ್ಯೆ: ಸಿಐ 152 ಐಎಪಿ (ಇ) 2020

(ಜಗದೀಶ ಶೆಟ್ಟರ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು